# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **363 (342)** |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| **ವಿಷಯ** | : | ಕೊಡಗು ಜಿಲ್ಲೆ ದುಬಾರೆಯಲ್ಲಿ ಕಾವೇರಿ ನದಿಗೆ ತೂಗು ಸೇತುವೆ ನಿರ್ಮಾಣದ ಬಗ್ಗೆ. |
| **ಉತ್ತರಿಸುವವರು** | : | ಮುಖ್ಯ ಮಂತ್ರಿ |
| **ಉತ್ತರಿಸುವ ದಿನಾಂಕ** | : | 10-12-2020. |

***

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ, ದುಬಾರೆ ಪ್ರದೇಶದಲ್ಲಿ ಹರಿಯುವ ಕಾವೇರಿ ನದಿಗೆ ಅಡ್ಡಲಾಗಿ ತೂಗು ಸೇತುವೆಯನ್ನು ನಿರ್ಮಾಣ ಮಾಡುವ ಯೋಜನೆ ಯಾವ ಹಂತದಲ್ಲಿದೆ; ಇದರ ಕಾಮಗಾರಿಯನ್ನು ಯಾವಾಗ ಪ್ರಾರಂಭ ಮಾಡಲಾಗುವುದು: (ಮಾಹಿತಿ ನೀಡುವುದು) | ಕೊಡಗು ಜಿಲ್ಲೆ, ಸೋಮವಾರಪೇಟೆ ತಾಲ್ಲೂಕಿನ ದುಬಾರೆಯ ಬಳಿ ಕಾವೇರಿ ನದಿಗೆ ಅಡ್ಡಲಾಗಿ ತೂಗು ಸೇತುವೆ ನಿರ್ಮಾಣ ಕಾಮಗಾರಿಯನ್ನು ರೂ.223.30ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ದಿನಾಂಕ: 19-09-2018ರ ಸರ್ಕಾರದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಈ ಕಾಮಗಾರಿಗೆ ದಿನಾಂಕ: 09-10-2018ರಂದು ರೂ.100.00 ಲಕ್ಷಗಳನ್ನು ಕೆಟಿಐಎಲ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.<br><br>ಸರ್ಕಾರದ ಆದೇಶ ದಿನಾಂಕ:23-11-2018ರಲ್ಲಿ ಮೇಲ್ಕಂಡ ಕಾಮಗಾರಿಯ ಅನುಷ್ಠಾನ ಸಂಸ್ಥೆ ಕೆಟಿಐಎಲ್ ಬದಲಾಗಿ ಲೋಕೋಪಯೋಗಿ ಇಲಾಖೆಗೆ ವಹಿಸಲಾಗಿರುತ್ತದೆ.<br><br>ಸದರಿ ಕಾಮಗಾರಿಗೆ ಕೆಟಿಐಎಲ್ ಶುಲ್ಕ ಕಟಾಯಿಸಿಕೊಂಡು ರೂ.99.50ಲಕ್ಷ ಅನುದಾನವನ್ನು ಲೋಕೋಪಯೋಗಿ ಇಲಾಖೆ, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಬಿಡುಗಡೆಗೊಳಿಸಲಾಗಿರುತ್ತದೆ.<br><br>ಈ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಕಾರಣದಿಂದಾಗಿ ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/190/ಟಿಡಿಪಿ/2020, ದಿನಾಂಕ:07-09-2020 ರಂದು ರದ್ದುಪಡಿಸಲಾಗಿದೆ. |
| ಆ) | ದುಬಾರೆ ಫಾರೆಸ್ಟ್‌ಗೆ ಬರುವ ಪ್ರವಾಸಿಗರ ಹಿತ ದೃಷ್ಟಿಯಿಂದ ಸುರಕ್ಷತೆಗಾಗಿ ತೆಗೆದುಕೊಂಡಿರುವ ಕ್ರಮಗಳೇನು: (ವಿವರ ನೀಡುವುದು) | ದುಬಾರೆ ಪ್ರವಾಸಿ ತಾಣದಲ್ಲಿ ಪ್ರವಾಸಿಗರ ಹಿತದೃಷ್ಟಿಯಿಂದ ಸುರಕ್ಷತೆಗಾಗಿ ತೆಗೆದುಕೊಂಡಿರುವ ಕ್ರಮಗಳು ಈ ಕೆಳಕಂಡಂತಿದೆ.<br>1. ಪ್ರವಾಸೋದ್ಯಮ ಇಲಾಖೆಯಿಂದ ದುಬಾರೆ ಪ್ರವಾಸಿ ತಾಣದಲ್ಲಿ ಪ್ರವಾಸಿಗರ ಸುರಕ್ಷತೆಗಾಗಿ ಎಚ್ಚರಿಕೆಯ ಸೂಚನಾ ಫಲಕಗಳನ್ನು ಅಳವಡಿಸಲಾಗಿದೆ.<br>2. ಮುಂದುವರೆದು, ಸಾಕಾನೆ ಶಿಬಿರದಲ್ಲಿರುವ ಸಾಕಾನೆಗಳ ಮಾವುತ ಹಾಗೂ ಕಾವಾಡಿಗಳ ಹಿತರಕ್ಷಣೆಗಾಗಿ ಪ್ರವಾಸಿಗರು ಆನೆಗಳ ಬಳಿ ಸುಳಿಯದಂತೆ ಟೇಪ್ ಮತ್ತು ಬ್ಯಾರಿಕೇಡ್ ಗಳನ್ನು ಅಳವಡಿಸಲಾಗಿದೆ.<br>3. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ರಿವರ್ ರಾಫ್ಟಿಂಗ್ ನಿರ್ವಹಣೆ ಮತ್ತು ಮೇಲುಸ್ತುವಾರಿ ಸಮಿತಿಯ ವತಿಯಿಂದ ದುಬಾರೆ ಪ್ರವಾಸಿ ಸ್ಥಳದಲ್ಲಿ ಸಿ.ಸಿ.ಕ್ಯಾಮೆರಾಗಳನ್ನು ಅಳವಡಿಸಲಾಗಿದೆ. |

2...

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| | | 4. ಅರಣ್ಯ ಇಲಾಖೆಯಿಂದ ಇಲಾಖಾ ಬೋಟುಗಳಲ್ಲಿ ನಿಯಮಿತ ಸಂಖ್ಯೆಯ ಪ್ರವಾಸಿಗರನ್ನು ಮಾತ್ರ ಅನುಮತಿಸಲಾಗುತ್ತಿದ್ದು, ಎಲ್ಲಾ ಪ್ರವಾಸಿಗರಿಗೆ ಲೈಫ್ ಜಾಕೇಟ್ ಧರಿಸುವಂತೆ ತಿಳಿಸಲಾಗುತ್ತಿದೆ ಹಾಗೂ ಬೋಟುಗಳನ್ನು ಬೋಟು ಚಾಲನಾ ಪರವಾನಗಿ ಹೊಂದಿರುವ ನುರಿತ ಸಿಬ್ಬಂದಿಗಳನ್ನು ಮಾತ್ರ ಕಾರ್ಯನಿರ್ವಹಿಸುವಂತೆ ಸೂಚಿಸಲಾಗಿರುತ್ತದೆ.<br>5. ಕೋವಿಡ್-19 ಮುನ್ನೆಚ್ಚರಿಕೆ ಕ್ರಮವಾಗಿ ದುಬಾರೆ ಸಾಕಾನೆ ಶಿಬಿರಕ್ಕೆ ಆಗಮಿಸುವ ಎಲ್ಲಾ ಪ್ರವಾಸಿಗರಿಗೆ ಮಾಸ್ಕ್ ಧರಿಸುವುದು ಕಡ್ಡಾಯಗೊಳಿಸಲಾಗಿದೆ ಹಾಗೂ ಬೋಟು ಹತ್ತುವ ಮುನ್ನ ಪ್ರತೀ ಪ್ರವಾಸಿಗರ ಥರ್ಮಲ್ ಸ್ಕ್ಯಾನಿಂಗ್ ಮಾಡಿ, ಹ್ಯಾಂಡ ಸ್ಯಾನಿಟೈಸರ್ ನೀಡಿ ಶಿಬಿರದಲ್ಲಿ ಸಾಮಾಜಿಕ ಅಂತರ ಕಾಪಾಡುವಂತೆ ತಿಳಿಲಾಗುತ್ತಿದೆ.<br>6. ಅರಣ್ಯ ಇಲಾಖೆಯಿಂದ ಪ್ರವಾಸಿಗರ ಹಿತದೃಷ್ಟಿಯಿಂದ ಚೈನಿಂಕ್ ಫೆನ್ಸಿಂಗ್ ಅಳವಡಿಸಲಾಗುತ್ತಿದೆ. |

ಸಂಖ್ಯೆ: ಟಿಒಆರ್ 250 ಟಿಡಿವಿ 2020

ಬಿಎಸ್
(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.